**ಹನುಮ ನಾಯಕ***

# ಚೆಲುವನಹಳ್ಳಿಯ ಗವಿಮಠ : ಒಂದು ಪ್ರಾಗೈತಿಹಾಸಿಕ ನೆಲೆ

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಬಾಣಾವರ ಹೋಬಳಿಯ ಚೆಲುವನಹಳ್ಳಿಯ ಗ್ರಾಮವು ಬಿ. ಎಚ್. ರಸ್ತೆಯಿಂದ ಸುಮಾರು ಎರಡು ಕಿ. ಮೀ. ದೂರದಲ್ಲಿದ್ದು, ಈ ಊರಿನ ಪಶ್ಚಿಮಕ್ಕೆ ಅರ್ಧ ಕಿ. ಮೀ. ದೂರದಲ್ಲಿ ಗವಿಮಠವಿದೆ. ಇಲ್ಲಿ ಕಲ್ಲುಬಂಡೆಗಳಿಂದ ಕೂಡಿದ ಮೂರು ಚಿಕ್ಕ ಗುಡ್ಡಗಳಿವೆ. ಈ ಗುಡ್ಡಗಳಲ್ಲಿ ಹಲವಾರು ನೈಸರ್ಗಿಕ ಗವಿಗಳು ಮತ್ತು ಕಲ್ಲಾಸರೆಗಳು ಇವೆ.

ಇಲ್ಲಿಯ ಅತಿ ದೊಡ್ಡ ಗುಡ್ಡದ ತಪ್ಪಲಿನಲ್ಲಿ ಸುಮಾರು ನಾಲ್ಕು ಎಕರೆ ಭೂಮಿಯು ಬೂದಿ ಬಣ್ಣದಲ್ಲಿದ್ದು ಹಲವಾರು ರೀತಿಯ ಮಡಕೆ ಚೂರುಗಳನ್ನು ಹೆಜ್ಜೆ ಹೆಜ್ಜೆಗೂ ಕಾಣಬಹುದು. ಈ ಮಡಕೆಯ ಚೂರುಗಳು ಹೆಚ್ಚಾಗಿ ಕೆಂಪು ಬಣ್ಣದಲ್ಲಿವೆ. ಕಪ್ಪು ಮಡಕೆಯ ಚೂರುಗಳು ವಿರಳ. ಮಡಕೆಯ ಚೂರುಗಳ ಮೇಲೆ ವಿವಿಧ ರೀತಿಯ ವಿನ್ಯಾಸಗಳು ಇವೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಜಿಗ್-ಜಾಗ್ ಮತ್ತು ರೇಖಾ ವಿನ್ಯಾಸಗಳು.

ಬ್ರೂಸ್ ಫೂಟ್ ಪ್ರಕಾರ ಕಂದು, ಕೆಂಪು ಬಣ್ಣದ ಮಡಕೆಗಳು ನವ ಶಿಲಾಯುಗದ ಆದಿ ಭಾಗದಲ್ಲಿ ತಯಾರಾದವು. ಅಂದರೆ ಸುಮಾರು ಕ್ರಿ ಪೂ. ೮೦೦೦ ದಿಂದ ೬೦೦೦ ವರ್ಷಗಳ ಹಿಂದೆ ಕೆಲವು ಕಪ್ಪು ಮಡಕೆಯ ಚೂರುಗಳು ಇಲ್ಲಿ ದೊರಕಿರುವುದರಿಂದ ಇದನ್ನು ಹೊಸ ಶಿಲಾಯುಗದ ಅಂತ್ಯ ಭಾಗ ಮತ್ತು ಲೋಹಯುಗದ ಕಾಲಕ್ಕೂ ಸೇರಿಸಬಹುದು.[1] ಇದು ಕ್ರಿ. ಪೂ. ಸುಮಾರು ೪೦೦೦ ದಿಂದ ೩೦೦೦. ಈ ಪ್ರದೇಶದಲ್ಲಿ ಈಗ ಸಾಗುವಳಿ ನಡೆಯುತ್ತಿರುವುದರಿಂದ ಈ ಮಡಕೆ ಚೂರುಗಳು ನೆಲದ ಮೇಲೆ ಎದ್ದು ಕಾಣುತ್ತವೆ. ಇಲ್ಲಿಯೇ ಒಮ್ಮೆ ರೈತರು ತಮ್ಮ ವ್ಯವಸಾಯಕ್ಕೋಸ್ಕರ ಸುಮಾರು ಐದು ಅಡಿ ಆಳದ ಗುಂಡಿಯನ್ನು ತೋಡಿದಾಗ ಅಲ್ಲಿಯೂ ಸಹ ಅದರ-ಪದರಗಳಲ್ಲಿ ಕ್ರಮವಾಗಿ ಸ್ವಲ್ಪ ಕಪ್ಪು ಮತ್ತು ಹೇರಳವಾಗಿ ನಯ ಮಾಡಿದ ಕೆಂಪು ಬಣ್ಣದ ಮಡಕೆಯ ಕುಡಿಕೆಗಳು ಕಂಡು ಬಂದಿದೆ. ಇಲ್ಲಿ ವೈಜ್ಞಾನಿಕ ವಿಧಿ-ವಿಧಾನಗಳನ್ನು ಅಳವಡಿಸಿ ಭೂಸಂಶೋಧನೆ ಮಾಡಿದರೆ ಮತ್ತಷ್ಟು ಮಾಹಿತಿ ಸಿಗಬಹುದು.

ಮಡಕೆ ಕುಡಿಕೆ ಚೂರುಗಳು ಸಿಕ್ಕಿರುವ ಪ್ರದೇಶದ ಸರಿಯಾಗಿ ಮಧ್ಯಭಾಗದಲ್ಲಿ ಸುಮಾರು ೪ ಮತ್ತು ೩ ಅಡಿ ಎತ್ತರದ ಎರಡು ನಿಲುಗಲ್ಲುಗಳಿವೆ. ನಾಲ್ಕು ಅಡಿ ಎತ್ತರವಿರುವ ನಿಲುಗಲ್ಲು ನೇರವಾಗಿ ನಿಂತಿದೆ. ೩ ಅಡಿ ಎತ್ತರವಿರುವ ನಿಲುಗಲ್ಲನ್ನು ಅಡ್ಡವಾಗಿ ನಿಲ್ಲಿಸಲಾಗಿದೆ. ಇದರ ಮೇಲೆ ಯಾವುದೇ ರೀತಿಯ ಕೆತ್ತನೆ ಇಲ್ಲದೆ ಸ್ವಾಭಾವಿಕ ರೂಪದಲ್ಲಿದೆ. ಇಲ್ಲಿಂದ ಒಂದು ಫರ್ಲಾಂಗ್

---

* ಇತಿಹಾಸ ಉಪನ್ಯಾಸಕರು, ವಿ.ವಿ.ಎಸ್. ಪದವಿಪೂರ್ವ ಮಹಿಳಾ ಕಾಲೇಜು, ಒಂದನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦

1 M.A.R. 1942, P. 107

ಪೂರ್ವ ದಿಕ್ಕಿನಲ್ಲಿ ಇದೇ ರೀತಿಯ ಇನ್ನೆರಡು ನಿಲುಗಲ್ಲುಗಳಿವೆ. ಬ್ರೂಸ್ ಫೂಟ್‌ರ ಪ್ರಕಾರ ಈ ನಿಲುಗಲ್ಲುಗಳು ಸಮೂಹ ಸಮಾಧಿಗಳನ್ನು ಗುರುತಿಸಲು ನೆಟ್ಟಿರುವ ಕಲ್ಲುಗಳು.[2] ದಕ್ಷಿಣ ಭಾರತದ ಹಲವಾರು ಪ್ರದೇಶಗಳಲ್ಲಿ ಕಂಡುಬಂದಿರುವಂತೆ ಎಲ್ಲಿ ನಿಲುಗಲ್ಲುಗಳು ಇರುತ್ತವೆಯೋ ಅಲ್ಲಿ ಖಂಡಿತವಾಗಿಯೂ ಪ್ರಾಗೈತಿಹಾಸಿಕ ವಾಸಸ್ಥಳಗಳು ಇರಲೇಬೇಕು. ಇದು ಭೂಸಂಶೋಧನೆಯಿಂದ ಮೂಡಿಬಂದಿರುವ ಸತ್ಯಸಂಗತಿ.[3]

ಪ್ರಾಗೈತಿಹಾಸಿಕ ಸ್ಥಳವೆಂದು ನಿರ್ಧರಿಸಿದ ಮೇಲೆ ಅದನ್ನು ಪ್ರತಿಪಾದಿಸಲು ಆಧಾರಗಳು ಇರಲೇಬೇಕು. ಈ ಆಧಾರಗಳೆಂದರೆ ಕಲ್ಲಿನ ಆಯುಧಗಳು. ಆದರೆ ಈ ಪ್ರದೇಶದಲ್ಲಿ ಸ್ವಾಭಾವಿಕ ಸ್ವರೂಪದ್ದಾಗಲೀ ಅಥವಾ ನಯ ಮಾಡಿದ ಶಿಲಾಯುಧವಾಗಲೀ ಸಿಕ್ಕಿಲ್ಲ. ತೀವ್ರ ಶೋಧನೆಯ ನಂತರ ಒಂದೇ ಒಂದು ಶಿಲಾಯುಧ ಸಿಕ್ಕಿತು. ಇದನ್ನು ಉಜ್ಜುವ ಅಥವಾ ಮಸೆಯುವ ಕಲ್ಲೆಂದು ನಿರ್ಧರಿಸಲಾಗಿದೆ. ಈ ಪ್ರದೇಶವು ಫಲವತ್ತಾಗಿರುವುದರಿಂದ ವ್ಯವಸಾಯ ಇಲ್ಲಿ ನಡೆಯುತ್ತಿದೆ.

ಗವಿಮಠವು ಪ್ರಾಗೈತಿಹಾಸಿಕ ನೆಲೆಯಾಗಿತ್ತೆಂದು ಹೇಳುವುದಕ್ಕೆ ಬೇರೆ ಆಧಾರಗಳೂ ಸಹ ಇವೆ. ಅವುಗಳೆಂದರೆ ವರ್ಣ ಚಿತ್ರಗಳು. ಈ ಪ್ರದೇಶದ ಕಲ್ಲಾಸರೆಗಳಲ್ಲಿ ಎರಡು ರೀತಿಯ ವರ್ಣ ಚಿತ್ರಗಳಿವೆ. ಅವುಗಳೆಂದರೆ ಕಡುಕೆಂಪು ಬಣ್ಣ ಮತ್ತು ಬಿಳಿಯ ಬಣ್ಣದ ಚಿತ್ರಗಳು.

ಇಲ್ಲಿಯ ಒಂದು ಕಲ್ಲಾಸರೆಯಲ್ಲಿ ಒಂದು ಬಹಳ ಸುಂದರವಾದ ಕಡು ಕೆಂಪುಬಣ್ಣದ ಚಿತ್ರವಿದೆ. ಈ ಕಲ್ಲಾಸರೆಯು ಸುಮಾರು ಇಪ್ಪತ್ತು ಅಡಿ ಉದ್ದ ಮತ್ತು ಹತ್ತು ಅಡಿ ಅಗಲ ವಿಸ್ತೀರ್ಣದಲ್ಲಿದ್ದು ದಕ್ಷಿಣಾಭಿಮುಖವಾಗಿದೆ. ಈ ಚಿತ್ರದಲ್ಲಿರುವ ವಿವರವನ್ನು ತಿಳಿಯುವುದು ತುಂಬಾ ಕ್ಲಿಷ್ಟಕರ. ಆದರೆ ಮಾನವನ ಚಿತ್ರಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ನಾಲ್ಕರಿಂದ ಐದು ಮಾನವ ವರ್ಣಚಿತ್ರಗಳನ್ನು ಗಮನಿಸಬಹುದು. ಇಲ್ಲಿಯ ಬಹು ಆಕರ್ಷಣೀಯವಾದ ಚಿತ್ರಗಳೆಂದರೆ ಹಾವುಗಳನ್ನು ಬಿಡಿಸಿರುವುದು. ಇವುಗಳನ್ನು ವಿವಿಧ ಕೋನಗಳಿಂದ ಬಿಡಿಸಲಾಗಿದೆ. ಹಾವುಗಳ ತಲೆಗಳು ಕೇಂದ್ರದಲ್ಲಿ ಬರುವಂತೆಯೂ ಹಾಗೂ ಅವುಗಳ ಬಾಲಗಳು ವೃತ್ತಾಕಾರದಲ್ಲಿರುವಂತೆ ಬಿಡಿಸಲಾಗಿದೆ. ಬಹುಶಃ ಇಡೀ ದಕ್ಷಿಣ ಭಾರತದಲ್ಲಿ ಇದು ಪ್ರಥಮ ಹಾವುಗಳ ವರ್ಣ ಚಿತ್ರವಿರಬಹುದು.

ಈ ವರ್ಣಚಿತ್ರವಿರುವ ಕಲ್ಲಾಸರೆಯ ಎದುರಿಗೆ ಇನ್ನೊಂದು ಚಿಕ್ಕ ಗುಡ್ಡವಿದೆ. ಇಲ್ಲಿಯೂ ಸಹ ಕಲ್ಲಾಸರೆಯು ದಕ್ಷಿಣಾಭಿಮುಖವಾಗಿದ್ದು ಇಲ್ಲಿ ಬಿಳಿಯ ವರ್ಣಚಿತ್ರಗಳಿವೆ. ಈ ಚಿತ್ರಗಳಲ್ಲಿ ಪ್ರಮುಖವಾಗಿ ಮನುಷ್ಯ, ಜಿಂಕೆ, ನವಿಲು, ನಾಯಿ ಮತ್ತು ಬಲೆ ಎದ್ದುಕಾಣುತ್ತದೆ. ಒಟ್ಟಾರೆ ಇಲ್ಲಿ ಬೇಟೆಯ ದೃಶ್ಯವನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

ಗವಿಮಠದಿಂದ ಸುಮಾರು ಎರಡು ಕಿ. ಮೀ. ದೂರದಲ್ಲಿ ಚಿಕ್ಕ ಚಿಕ್ಕ ಬಂಡೆಗಳಿಂದ ಕೂಡಿದ ಒಂದು ಗುಡ್ಡದಲ್ಲಿಯೂ ಸಹ ಶ್ವೇತವರ್ಣ ಚಿತ್ರಗಳಿವೆ. ಇದರಲ್ಲಿ ಹೆಚ್ಚಾಗಿ ಮನುಷ್ಯ, ಪ್ರಾಣಿ ಮತ್ತು ಏಣಿಯ ಚಿತ್ರಗಳಿವೆ. ಇಲ್ಲಿಯೂ ಸಹ ಬೇಟೆಯ ದೃಶ್ಯವನ್ನು ಗಮನಿಸಬಹುದು. ಇತಿಹಾಸ ಪುರಾತತ್ವಜ್ಞರು ಈ ವರ್ಣ ಚಿತ್ರಗಳನ್ನು ಕ್ರಮವಾಗಿ ಹಳೆ ಶಿಲಾಯುಗ ಮತ್ತು ನವ ಶಿಲಾಯುಗದ ಕಾಲಕ್ಕೆ ಸೇರಿಸುತ್ತಾರೆ. ಆದರೆ ಇರ್ವಿನ್ ನ್ಯೂಮೇಯರ್ ಅವರು ಕೆಂಪು ವರ್ಣಚಿತ್ರಗಳನ್ನು ನವ ಶಿಲಾಯುಗದ ಆದಿಭಾಗಕ್ಕೆ ಮತ್ತು ಬಿಳಿಯ ವರ್ಣಚಿತ್ರಗಳನ್ನು ಲೋಹಯುಗಕ್ಕೂ ಸೇರಿಸುತ್ತಾರೆ.[4] ಈ ರೀತಿಯ ವರ್ಣಚಿತ್ರಗಳಿರುವ ಪ್ರಾಗೈತಿಹಾಸಿಕ ಸ್ಥಳ ಹಾಸನ ಜಿಲ್ಲೆಯಲ್ಲೇ ಪ್ರಥಮದ್ದಾಗಿದ್ದು ವಿಶೇಷವಾಗಿದೆ.

ಕೆಂಪು ವರ್ಣಚಿತ್ರವಿರುವ ಕಲ್ಲಾಸರೆಯ ಪಕ್ಕ

---

2 M.A.R. 1942, P. 107

3 ,,

4 Erwin Neumayer, *Pre-Historic Rock paintings*

ದಲ್ಲಿಯೇ ಒಂದು ಗವಿ ಇದ್ದು ಇದರೊಳಗೆ ನೀರಿನ ಆಸರೆಯಿದೆ. ಈ ಗವಿಯ ಎದುರಿಗೆ ಒಂದು ಚಿಕ್ಕ ಬಂಡೆಯ ಮೇಲೆ ಮಿಥುನ ರೇಖಾ ಚಿತ್ರಗಳಿವೆ. ಇದೊಂದು ಇಲ್ಲಿಯ ವೈಶಿಷ್ಟ್ಯವಾಗಿದೆ. ಇರ್ವಿನ್ ನ್ಯೂಮೇಯರ್ ಅವರು ಈ ರೀತಿಯ ರೇಖಾ ಚಿತ್ರಗಳು ಚಾಲ್ಕೋಲಿಥಿಕ್ ಕಾಲಕ್ಕೆ ಸೇರಿದವೆಂದು ಅಭಿಪ್ರಾಯ ಪಡುತ್ತಾರೆ.[5]

ಈ ರೀತಿಯಲ್ಲಿ ಚೆಲುವನಹಳ್ಳಿಯ ಗವಿಮಠವು ಹಾಸನ ಜಿಲ್ಲೆಯ ಅತ್ಯಂತ ಪ್ರಮುಖ ಪ್ರಾಗೈತಿಹಾಸಿಕ ಕೇಂದ್ರವಾಗಿದ್ದು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿ ಸಂಶೋಧನೆ ನಡೆಸಿದರೆ ಇನ್ನೂ ಹೊಸ ವಿಷಯಗಳು ಬೆಳಕಿಗೆ ಬರಬಹುದು.

[ಈ ಪ್ರಬಂಧವನ್ನು ರಚಿಸಲು ಕ್ಷೇತ್ರ ಕಾರ್ಯದಲ್ಲಿ ಸರ್ವ ರೀತಿಯಲ್ಲೂ ಸಹಕರಿಸಿದ ಗೆಳೆಯ ಶ್ರೀ ಜೆ. ಟಿ. ಜಯರಾಮಯ್ಯ ಮತ್ತು ಇದನ್ನು ರಚಿಸಲು ಸಲಹೆಗಳನ್ನು ನೀಡಿದ ಗುರುಗಳಾದ ಡಾ. ದೇವರಕೊಂಡಾರೆಡ್ಡಿ ಮತ್ತು ಶ್ರೀ ಲಕ್ಷ್ಮಣ್ ತೆಲಗಾವಿಯವರಿಗೆ ನಾನು ಆಭಾರಿಯಾಗಿದ್ದೇನೆ.]

5 Erwin Neumayer, *Pre-Historic Rock paintings*